



# ಹೊಂಗನಸು




ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರಿಕೆ

ಹೊಂಗನಸು – 36

ಸಂಪುಟ: ೦೪ ಸಂಚಿಕೆ: ೧೦ Vol. 04 Issue 10 | ಜನವರಿ ೨೦೧೮ January 2018 | ಪುಟಗಳು ೮ Pages - 8 | ವಾರ್ಷಿಕ ಚಂದ ರೂ. ೨೦/– A. Sub. - Rs. 20/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ Editor : Sri. B.R. Ravindranath





ಚಂದಾ ವಿವರಗಳು
ವಾರ್ಷಿಕ ಚಂದಾ
ರೂ. ೨೦/–
ಐದು ವರ್ಷಗಳ ಚಂದಾ
ರೂ. ೧೦೦/–



ವಿಳಾಸ
ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಮಧ್ಯಾಹ್ನ 12–30ರಿಂದ ಸಂಜೆ 7–00ಗಂಟೆ.
ವಾರದ ರಜೆ: ಮಂಗಳವಾರ





## ಹೊಂಗನಸು ಓದುಗರಿಗೆ ಹಾಗೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಎಲ್ಲಾ ಸದಸ್ಯರಿಗೂ ಹೊಸ ವರ್ಷದ ಶುಭಾಶಯಗಳು

## ೧೭–೧೨–೨೦೧೭ ವಿಚಾರ ಸಂಕಿರಣ–ಆಧುನಿಕ ಪೂರ್ವ ಗದ್ಯ ಸಾಹಿತ್ಯ (ಒಂದು ದಿನದ ವಿಚಾರ ಸಂಕಿರಣ)

### ಎಂ.ಎ. ರಾಮಾನುಜ ಐಯ್ಯಂಗಾರ್ ದತ್ತಿ ಮತ್ತು ಪ್ರೊ. ಬಿ.ರಾಮಸ್ವಾಮಿ ದತ್ತಿ

ಕನ್ನಡ ಭಾಷೆಯಲ್ಲಿಯ ಗದ್ಯ,ಪದ್ಯ ಪ್ರಕಾರಗಳು ಪೂರ್ವ ಕಾಲದಿಂದಲೂ ಆಯಾಯ ಕಾಲಘಟ್ಟದ ರಾಜ ಮಹಾರಾಜರುಗಳ ಮತ್ತು ಮಂಡಲಿಕರ/ ಅಧಿಕಾರಗಳ ಪ್ರೋತ್ಸಾಹದಿಂದ ಅಭಿವೃದ್ಧಿಗೆ ಬಂದಿರುವ ವಿಷಯ ನಮಗೆಲ್ಲರಿಗೂ ತಿಳಿದ ವಿಷಯವೇ. ಸ್ವತಃ ಕೆಲವು ರಾಜಮಹಾರಾಜರುಗಳು ಕವಿಗಳಾಗಿದ್ದು ಗ್ರಂಥಗಳನ್ನು ರಚಿಸಿದ್ದರೆ ಇನ್ನು ಕೆಲವರು ಹಲವಾರು ಕವಿಗಳಿಗೆ ಪೋಷಕರಾಗಿ ಪ್ರೋತ್ಸಾಹ ನೀಡಿ ಗ್ರಂಥರಚನೆ ಮಾಡಿಸಿದ್ದಾರೆ.

ಪ್ರಸ್ತುತ ವಿಚಾರ ಸಂಕಿರಣದ ಉದ್ದೇಶ, ಗದ್ಯ ಪ್ರಕಾರವು ಶಾಸನಗಳಿಂದ ಆರಂಭವಾಗಿ, ವಿವಿಧ ಕಾಲಘಟ್ಟಗಳಲ್ಲಿನ ಅದರ ಸ್ವರೂಪ ಮತ್ತು ಬೆಳವಣಿಗೆ,

೫ನೇ ಪುಟಕ್ಕೆ

### ಡಾ. ಪಿ.ವಿ. ನಾರಾಯಣ – ೭೫



ಬಿಎಂಶ್ರೀ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ಅವರಿಗೆ ೧೮ನೇ ಡಿಸೆಂಬರ್ ೨೦೧೭ ರಂದು ೭೫ ವರ್ಷ ತುಂಬಿತು. ದಿನಾಂಕ ೧೭ನೇ ಡಿಸೆಂಬರ್ ರಂದು ನಡೆದ ಕಾರ್ಯಕ್ರಮದ ಅಂತ್ಯದಲ್ಲಿ ಅವರಿಗೆ ಅಭಿನಂದಿಸಲಾಯಿತು.



# ಸಂಪಾದಕೀಯ

ಹೊಂಗನಸು ಪತ್ರಿಕೆಯ ೩೬ನೇ ಸಂಚಿಕೆ ನಿಮ್ಮ ಕೈಯಲ್ಲಿದೆ. ಕಳೆದ ಮೂರು ವರ್ಷಗಳಿಂದ ಪ್ರತಿಷ್ಠಾನದ ಚಟುವಟಿಕೆಗಳ ವಿವರಗಳನ್ನು ಈ ಮೂಲಕ ನಿಮಗೆ ತಲುಪಿಸುತ್ತಿದ್ದೇವೆ. ಈ ಹಿಂದೆ ತ್ರೈಮಾಸಿಕವಾಗಿ ಪ್ರಕಟಗೊಳ್ಳುತ್ತಿದ್ದ ಪ್ರತಿಷ್ಠಾನದ ವಾರ್ತಾಪತ್ರ ಫೆಬ್ರವರಿ ೨೦೧೪ ರಿಂದ ಮಾಸಿಕ ಪತ್ರಿಕೆಯಾಗಿ ಹೊಂಗನಸು ಹೆಸರಿನಲ್ಲಿ ವೈವಿಧ್ಯಮಯವಾಗಿ ಪ್ರಕಟಗೊಳ್ಳುತ್ತಿದೆ. ಇದನ್ನು ಸಾಧ್ಯಮಾಡಗೊಡಿಸಿದ ನಿಮ್ಮೆಲ್ಲರ ಸಹಕಾರ ಹಾಗೂ ಬೆಂಬಲಕ್ಕೆ ನಾವು ಅಭಾರಿಯಾಗಿದ್ದೇವೆ.

೨೦೧೭ನೇ ಇಸವಿಯಲ್ಲಿ ಪ್ರತಿಷ್ಠಾನದಲ್ಲಿ ಹಲವಾರು ಪ್ರಮುಖ ಹಾಗೂ ವೈವಿಧ್ಯಮಯ ಕಾರ್ಯಕ್ರಮಗಳನ್ನು ನಡೆಸಿರುತ್ತೇವೆ. ೨೦೧೮ ಇಸವಿಯಲ್ಲಿ ಮತ್ತಷ್ಟು ಮೌಲಿಕ ಕಾರ್ಯಕ್ರಮಗಳನ್ನು ನಡೆಸಲು ನಾವೆಲ್ಲರೂ ಉತ್ಸುಕರಾಗಿದ್ದೇವೆ. ನಮ್ಮ ಯೋಜನೆಗಳು ಹಾಗೂ ಕಾರ್ಯಕ್ರಮಗಳು ಯಶಸ್ವಿಗೊಳ್ಳಲು ನಿಮ್ಮ ಸಲಹೆ ಸೂಚನೆಗಳು ಹಾಗೂ ಸಹಕಾರ ನೀಡಬೇಕೆಂದು ಕೋರುತ್ತೇವೆ.

**ಬಿ.ಆರ್ ರವೀಂದ್ರನಾಥ್**
ಸಂಪಾದಕರು.......

## ಜನವರಿ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಚದುರಂಗ ಎಂ. ಸುಬ್ರಹ್ಮಣ್ಯರಾಜು | ೧-೧-೧೯೧೬ |
| ಬಿ.ಎಂ.ಶ್ರೀ | ೩-೧-೧೮೮೪ |
| ವ್ಯಾಕರಣತೀರ್ಥಚಂದ್ರ ಶೇಖರ ಶಾಸ್ತ್ರೀಗಳು | ೩-೧-೧೮೯೨ |
| ಶಂ.ಬಾ. ಜೋಶಿ | ೪-೧-೧೮೯೬ |
| ಗಳಗನಾಥರು | ೫-೧-೧೮೬೯ |
| ನಾ. ಕಸ್ತೂರಿ ಸಂಸ | ೧೪-೧-೧೮೯೮ |
| ಶಾಂತಕವಿ (ಸಕ್ಕರಿ ಬಾಳಾಚಾರ್ಯ) | ೧೫-೧-೧೮೫೬ |
| ಆರ್.ಸಿ. ಹಿರೇಮಠ | ೧೫-೧-೧೯೨೦ |
| ಸುರಂಎಕ್ಕುಂಡಿ | ೨೦-೧-೧೯೨೩ |
| ಕೆ.ಎಸ್. ನರಸಿಂಹಸ್ವಾಮಿ | ೨೬-೧-೧೯೧೫ |
| ಎಂ ಕೆ ಇಂದಿರಾ | ೦೫-೦೧-೧೯೧೭ |
| ಎಂ ಕೆ ಜಯಲಕ್ಷ್ಮಿ | ೦೬-೦೧-೧೯೨೯ |
| ಬನಶಂಕರಮ್ಮ ಕೆ ಟಿ | ೧೩-೦೧-೧೯೩೦ |
| ಆನಂದಿ ಸದಾಶಿವರಾವ್ | ೨೦-೦೧-೧೯೨೯ |

## ಜನವರಿ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಹರ್ಡೇಕರ್ ಮಂಜಪ್ಪ | ೩-೧-೧೯೧೬ |
| ರಾಶಿ(ಡಾ. ಎಂ.ಶಿವರಾಂ) | ೧೩-೧-೧೯೮೪ |
| ಮುಳಿಯ ತಿಮ್ಮಪ್ಪಯ್ಯ | ೧೬-೧-೧೯೫೦ |
| ಕೆರೂರ ವಾಸುದೇವಾಚಾರ್ಯ | ೨೧-೧-೧೯೨೧ |
| ಬಿ.ಪುಟ್ಟಸ್ವಾಮಯ್ಯ | ೨೫-೧-೧೯೮೪ |
| ಪಿ.ಲಂಕೇಶ್ | ೨೫-೧-೨೦೦೦ |
| ಟಿ. ಸುನಂದಮ್ಮ | ೨೭-೦೧-೨೦೦೬ |

# ಪ್ರಕಟಣೆ

ಶ್ರೀಮತಿ ಕಮಲಿನಿ ಶಾ.ಬಾಲೂರಾವ್ ಅವರು ಸ್ಥಾಪಿಸಿ, ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು ಕಳೆದ ಐದು ವರ್ಷಗಳಿಂದ ಕೊಡಮಾಡುತ್ತ ಬಂದಿರುವ 'ಶ್ರೀ ಸಾಹಿತ್ಯ ಪ್ರಶಸ್ತಿ'ಗೆ ಈ ವರ್ಷ(2017) ಒಟ್ಟು ಸಾಹಿತ್ಯವನ್ನು ಗುರುತಿಸಿ ಪ್ರೊ। ಎಲ್.ಎಸ್.ಶೇಷಗಿರಿರಾವ್ ಅವರನ್ನು ಆಯ್ಕೆ ಸಮಿತಿಯು ಸರ್ವಾನುಮತದಿಂದ ಆರಿಸಿದೆ. ಆಯ್ಕೆ ಸಮಿತಿಯಲ್ಲಿ ಡಾ। ಎಚ್.ಎಸ್. ವೆಂಕಟೇಶ್ ಮೂರ್ತಿ, ಪ್ರೊ। ಆರ್.ಸಿ.ಕುಲಕರ್ಣಿ ಮತ್ತು ಪ್ರೊ। ದಂಡಪ್ಪ ಅವರುಗಳಿದ್ದರು. ಪ್ರಶಸ್ತಿಯು ಒಂದು ಲಕ್ಷ ರೂಪಾಯಿ ನಗದು, ಸ್ಮರಣಿಕೆ, ಶಾಲು ಮುಂತಾದವುಗಳನ್ನೊಳಗೊಂಡಿರುತ್ತದೆ. ಪ್ರಶಸ್ತಿ ಪ್ರದಾನದ ವಿಶೇಷ ಸಮಾರಂಭವು ಭಾನುವಾರ ಜನವರಿ 7, 2018ರಂದು ಪ್ರೊ। ಎಲ್. ಎಸ್. ಶೇಷಗಿರಿರಾವ್ ಮತ್ತು ಭಾರತಿಯವರ ಮನೆಯಲ್ಲಿ ('ಪಾರಿಜಾತ' ನಂ-11, 5ನೆಯ ಅಡ್ಡರಸ್ತೆ, 21ನೇ ಮುಖ್ಯರಸ್ತೆ, ಮಾರೇನಹಳ್ಳಿ, ಜೆ.ಪಿ.ನಗರ, 2ನೆಯ ಫೇಸ್, ಬೆಂಗಳೂರು-560078) ನಡೆಯಲಿದೆ. ಪ್ರೊ॥ ಎಂ.ಎಚ್.ಕೃಷ್ಣಯ್ಯ ಅವರು ಸಮಾರಂಭದ ಅಧ್ಯಕ್ಷತೆ ವಹಿಸಿ, ಪ್ರಶಸ್ತಿ ಪ್ರದಾನ ಮಾಡುವರು.

# ಪ್ರಕಟಣೆ

ತಾಳೆಗರಿ/ ಓಲೆಗರಿ, ಕಾಗದದ ಮೇಲೆ ಬರೆದ ಪ್ರಾಚೀನ ಹಸ್ತಪ್ರತಿಗಳು, ಕಡತಗಳು ದೇಶದ ಅಮೂಲ್ಯವಾದ ಅಸ್ತಿ ಮತ್ತು ಸಂಪತ್ತು. ಭಾರತ ಸರ್ಕಾರವು ಅವುಗಳನ್ನು ಉಳಿಸಿಕೊಳ್ಳುವ ಮಹತ್ತರ ಕಾರ್ಯವನ್ನು ಕೈಗೊಂಡಿದೆ. (National Mission for Manuscripts, New Delhi) ಈ ನಿಟ್ಟಿನಲ್ಲಿ ಬೆಂಗಳೂರಿನಲ್ಲಿರುವ ಬಿ.ಎಂ.ಶ್ರೀ.ಪ್ರತಿಷ್ಠಾನವು ಸಂರಕ್ಷಣಾ ಕಾರ್ಯವನ್ನು ನಿರ್ವಹಿಸುತ್ತಾ ಬರುತ್ತಿದೆ. ಇಂತಹ ಮೌಲಿಕ ದಾಖಲೆಗಳು ನಾಶವಾಗುವುದನ್ನು ತಪ್ಪಿಸಲು, ಬಿ.ಎಂ.ಶ್ರೀ ಪ್ರತಿಷ್ಠಾನವು ಸಾರ್ವಜನಿಕರು, ಮಠಮಾನ್ಯಗಳು, ಗುರುಕುಲಗಳು, ಅರಮನೆ, ಗುರುಮನೆಗಳು, ವಿದ್ಯಾಸಂಸ್ಥೆಗಳು ಹೊಂದಿರಬಹುದಾದ ತಾಳೆಗರಿ ಗ್ರಂಥಗಳ ಮತ್ತು ಪ್ರಾಚೀನ ಹಸ್ತಪ್ರತಿಗಳ ಸಂರಕ್ಷಣೆ ಬಗ್ಗೆ ಅರಿವನ್ನು ಮೂಡಿಸುತ್ತದೆ.(Preventive maintenance). ಸಂರಕ್ಷಣಾ ಸೇವೆ ಹಾಗೂ ಗ್ರಂಥಸೂಚಿ ತಯಾರಿಕೆ ಸೇವೆಗಳನ್ನೂ ನೀಡಲಾಗುವುದು. ಆಸಕ್ತರು ಈ ಸೇವೆಯ ಸದುಪಯೋಗ ಪಡೆಯಲು ಸಂಪರ್ಕಿಸಿ:

**ಶ್ರೀ ಬಿ.ಎಸ್. ಗುರುಪ್ರಸಾದ್,** ಸಂಯೋಜಕರು, ಹಸ್ತಪ್ರತಿ ವಿಭಾಗ,
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ,
ಮೊಬೈಲ್-9535097337

## ಪ್ರಕಟಣೆ

ಬಿಎಂಶ್ರೀ ಪ್ರತಿಷ್ಠಾನವು ೩೭ ವರ್ಷಗಳಿಂದ ಸಾವಿರಾರು ಕಾರ್ಯಕ್ರಮಗಳು ಹಾಗೂ ಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿದ್ದು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅವಿರತವಾಗಿ ಸಕ್ರಿಯವಾಗಿರುತ್ತದೆ.ಬಿಎಂಶ್ರೀ ಪ್ರತಿಷ್ಠಾನವು ನಡೆದು ಬಂದ ದಾರಿಯನ್ನು ದಾಖಲಿಸಿ ಸಾಧನೆಗಳನ್ನು ಗುರುತಿಸಿ ಇದನ್ನು ಸಾಧ್ಯಗೊಳಿಸಿದ ಹಲವಾರು ಮಹನೀಯರ ಕೊಡುಗೆಗಳನ್ನು ಸ್ಮರಿಸಿಕೊಳ್ಳುವ ಕಾರ್ಯವನ್ನು ಕೈಗೊಳ್ಳಲು ಪ್ರತಿಷ್ಠಾನವು ಚಿಂತನೆ ನಡೆಸುತ್ತಿದೆ. ಇಂತಹ ಬೃಹತ್ ಕಾರ್ಯವನ್ನು ಸಾಧಿಸಲು ಪ್ರತಿಷ್ಠಾನದ ಜೊತೆ ಕೈಗೂಡಿಸಿ ಕೆಲಸ ಮಾಡುವಂತಹ ಸ್ವಯಂಪ್ರೇರಿತರು ಬೇಕಾಗಿರುತ್ತಾರೆ. ಈ ಮಹತ್ವದ ಕಾರ್ಯದಲ್ಲಿ ಭಾಗವಹಿಸುವಂತೆ ಎಲ್ಲ ಸದಸ್ಯರನ್ನೂ ನಮಗೆ ಬೆಂಬಲ ನೀಡಬೇಕೆಂದು ಕೋರುತ್ತವೆ. ಆಸಕ್ತರು ದಯವಿಟ್ಟು ಸಂಪರ್ಕಿಸಿ: ಗೌರವ ಕಾರ್ಯದರ್ಶಿ, ಬಿಎಂಶ್ರೀ ಪ್ರತಿಷ್ಠಾನ, ಬೆಂಗಳೂರು

# ಜನವರಿ ೨೦೧೮ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ



### ೦೭-೦೧-೨೦೧೮ ಭಾನುವಾರ ಬೆಳಿಗ್ಗೆ ೧೦-೩೦ಗಂಟೆಗೆ

**ಶ್ರೀಸಾಹಿತ್ಯ ಪ್ರಶಸ್ತಿ ಪ್ರದಾನ ಪುರಸ್ಕೃತರು**

ಪ್ರಶಸ್ತಿ ಪುರಸ್ಕೃತರು : ಶ್ರೀ ಎಲ್.ಎಸ್. ಶೇಷಗಿರಿರಾವ್

ಪ್ರಶಸ್ತಿ ಪ್ರದಾನಮಾಡುವವರು : ಪ್ರೊ॥ ಎಂ.ಎಚ್. ಕೃಷ್ಣಯ್ಯ

ನಡೆಯುವ ಸ್ಥಳ : ಪ್ರೊ। ಎಲ್.ಎಸ್. ಶೇಷಗಿರಿರಾವ್ ಮತ್ತು ಭಾರತಿಯವರ ಮನೆಯಲ್ಲಿ ನಡೆಯಲಿದೆ.

(ವಿಳಾಸ : 'ಪಾರಿಜಾತ' ನಂ-೧೧, ೫ನೆಯ ಅಡ್ಡರಸ್ತೆ, ೨೧ನೇ ಮುಖ್ಯರಸ್ತೆ, ಮಾರೇನಹಳ್ಳಿ, ಜೆ.ಪಿ.ನಗರ, ೨ನೆಯ ಫೇಸ್, ಬೆಂಗಳೂರು-೫೬೦೦೭೮)



### ೧೦-೦೧-೨೦೧೮ ಬುಧವಾರ ಸಂಜೆ ೬-೦೦ ಗಂಟೆಗೆ

**ಗಮಕವಾಹಿನಿ-೨೪**

'ಪಂಪಭಾರತ' ಸಂಚಿಕೆ- ೧೧ (ಮುಂದುವರೆದ ಭಾಗ)

ವಾಚನ : ಶ್ರೀಮತಿ ಗಾಯತ್ರಿ

ವ್ಯಾಖ್ಯಾನ : ವಿದ್ವಾನ್॥ ಫಣಿರಾಜ್

ನೇತೃತ್ವ- ಶ್ರೀಮತಿ ಸಿ.ವಿ. ಶ್ರೀಮತಿ

### ೧೨-೦೧-೨೦೧೮ ಶುಕ್ರವಾರ ಸಂಜೆ ೬-೦೦ ಗಂಟೆಗೆ

ರಂಗನಾಯಕಮ್ಮ-ಕೆ.ಜಿ. ಸುಬ್ಬರಾವ್ (ಸಂಗೀತ ಕಾರ್ಯಕ್ರಮ)

ಹಾಡುವವರು : ಶ್ರೀಮತಿ ಪ್ರಭಾ ಜೆ. ಇನಾಂದಾರ್.



### ೧೮-೦೧-೨೦೧೮ ಗುರುವಾರ ಸಂಜೆ ೬-೦೦ ಗಂಟೆಗೆ

**"ಅಕ್ಕರಗೊಟ್ಟಿ"**

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : ಪತ್ರಿಕೆಗಳಲ್ಲಿನ ಪುರವಣಿಯ ಸ್ವರೂಪ

ಉಪನ್ಯಾಸ : ಎನ್.ಎಸ್. ಶ್ರೀಧರಮೂರ್ತಿ



### ೨೧-೦೧-೨೦೧೮ ಭಾನುವಾರ ಬೆಳಿಗ್ಗೆ ೧೦-೩೦ ಗಂಟೆಗೆ

**ಗಮಕ**

ವಿಷಯ - ಕುವೆಂಪು "ರಾಮಾಯಣದರ್ಶನಂ"

ಬಿ.ಜಿ.ಕುಸುಮಾ ಟ್ರಸ್ಟ್- ದಿ। ಬಿ.ಎಸ್. ಗೋಪಾಲರಾವ್ ಮತ್ತು ಶ್ರೀಮತಿ ವೇದವತಿಬಾಯಿ ದತ್ತಿ

ಗಮಕವಾಚನ : ಶ್ರೀ ಎಂ. ಆರ್. ಸತ್ಯನಾರಾಯಣ

ವ್ಯಾಖ್ಯಾನ- ಶ್ರೀ ಕೆ. ಇ. ರಾಧಾಕೃಷ್ಣ



### ೨೮-೧೦-೨೦೧೮ ಭಾನುವಾರ ಬೆಳಿಗ್ಗೆ ೧೦-೩೦ ಗಂಟೆಗೆ

**ಭಾವಗೀತೆ ಸ್ಪರ್ಧೆ**

ಮೋಹನದೇವ ಆಳ್ವ ಮತ್ತು ಎಂ.ಕೆ.ಶೈಲಜಾ ಆಳ್ವ ದತ್ತಿ

(ಹದಿನೆಂಟರಿಂದ ಇಪ್ಪತ್ತೈದು ವಯಸ್ಸಿನವರಿಗೆ )

**ಕೋರಿಕೆ :**

**ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/ - ಆಗಿದ್ದು ಐದು ವರ್ಷಗಳ ಚಂದಾಹಣ ರೂ, 100/- ಮಾತ್ರ. ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.**

# ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ನವೆಂಬರ್ – ಡಿಸೆಂಬರ್ 2017 ತಿಂಗಳಿನಲ್ಲಿ ನಡೆದ ಕಾರ್ಯಕ್ರಮಗಳು

## ೨೨–೧೧–೨೦೧೭
## ಶ್ರೀಮತಿ ಬಿ.ಜಿ. ಕುಸುಮ ಟ್ರಸ್ಟ್ ದತ್ತಿ
## ಸರ್.ಸಿ.ವಿ.ರಾಮನ್ ಸ್ಮಾರಕ ವಿಜ್ಞಾನ ಉಪನ್ಯಾಸ

ದಿನಾಂಕ ೨೨–೧೧–೨೦೧೭ರಂದು ಪ್ರತಿಷ್ಠಾನದ ಸಭಾಂಗಣದಲ್ಲಿ ನೊಬೆಲ್ ಪ್ರಶಸ್ತಿಗಳಿಸಿದ ಸರ್.ಸಿ.ವಿ.ರಾಮನ್ ಸ್ಮಾರಕ ವಿಜ್ಞಾನ ಉಪನ್ಯಾಸವನ್ನು ಶ್ರೀಮತಿ ಬಿ.ಜಿ. ಕುಸುಮ ಟ್ರಸ್ಟ್‌ದತ್ತಿವತಿಯಿಂದ ಆಯೋಜಿಸಲಾಗಿತ್ತು. ಖ್ಯಾತ ಭೂ ವಿಜ್ಞಾನಿ ಮತ್ತು ವಿಜ್ಞಾನ ವಿಷಯದ ಲೇಖಕರಾದ ಡಾ.ಟಿ.ಆರ್. ಅನಂತರಾಮು ಅವರು "ಬದಲಾಗುತ್ತಿರುವ ಹವಾಮಾನ"ದ ಬಗ್ಗೆ ಪ್ರಾತ್ಯಕ್ಷಿಕೆಯೊಡನೆ ಉಪನ್ಯಾಸ ನೀಡಿದರು. ಕಾರ್ಯಕ್ರಮದ ಆರಂಭದಲ್ಲೇ ಡಾ.ಪಿ.ವಿ.ನಾರಾಯಣ ಅವರು ಸಭೆಗೆ ಡಾ.ಅನಂತ ರಾಮು ಅವರ ಪರಿಚಯ ಮತ್ತು ಸಾಧನೆಗಳನ್ನು ಕುರಿತಂತೆ, ಸಭೆಗೆ ತಿಳಿಸಿದರು. ದತ್ತಿದಾನಿಗಳಾದ ಶ್ರೀಮತಿ ಬಿ.ಜಿ. ಕುಸುಮ ಮತ್ತು ಕುಟುಂಬ ವರ್ಗದವರನ್ನೂ ಪರಿಚಯಿಸಿ, ಎಲ್ಲರಿಗೂ ಸ್ವಾಗತ ಕೋರಿ, ಕಾರ್ಯಕ್ರಮಕ್ಕೆ ಚಾಲನೆ ನೀಡಿದರು.




ಭೂಮಿಗೆ ೪೫೦ ಕೋಟಿ ವರ್ಷಗಳ ಇತಿಹಾಸವಿರುವ ವಿಚಾರಗಳನ್ನು, ಈಗ ಭೌಗೋಳಿಕವಾಗಿ ಗುರುತಿಸುತ್ತಿರುವ ಆಫ್ರಿಕಾ ಖಂಡ, ಯೂರೋಪ್ ಖಂಡ, ಆಸ್ಟ್ರೇಲಿಯಾಖಂಡ ಮತ್ತು ಇತರ ಖಂಡಗಳು ರೂಪುಗೊಳ್ಳುವ ಮುನ್ನ ಇದ್ದ ಜಗತ್ತಿನ ಸ್ವರೂಪ, ವಿವಿಧ ಕಾಡುಗಳ ಸ್ವರೂಪ, ಹವಾಮಾನ ಮತ್ತು ಹವಾಗುಣ ಶಬ್ದಗಳ ಅರ್ಥ, ಭೂಮಿಯಲ್ಲಿನ ತಾಪಮಾನದ ಏರಿಕೆ, ಜಾಗತಿಕ ಮಟ್ಟದಲ್ಲಿ ಹವಾಗುಣದ ಬದಲಾವಣೆ, ವಾಯುಮಾಲಿನ್ಯಕ್ಕೆ ಕಾರಣವಾಗುತ್ತಿರುವ ವಿಪರೀತ industrialisation ವಿಶ್ವಸಂಸ್ಥೆ ಮತ್ತು ಇತರ ರಾಷ್ಟ್ರಗಳು ಜಾಗತಿಕ ಮಟ್ಟದಲ್ಲಿ ಹವಾಗುಣವನ್ನು ಕಾಪಾಡುವ ಬಗ್ಗೆ ನಡೆಸುತ್ತಿರುವ ಪ್ರಯತ್ನಗಳನ್ನು ಸಂಕ್ಷಿಪ್ತವಾಗಿ ಪ್ರಾತ್ಯಕ್ಷಿಕೆಯೊಡನೆ ಮೌಲ್ಯಯುತವಾದ ಉಪನ್ಯಾಸ ನೀಡಿದರು. ಅಂತ್ಯದಲ್ಲಿ ಹತ್ತು ನಿಮಿಷಗಳ ಅವಧಿಯನ್ನು ಸಂವಾದಕ್ಕೆ ಅನುವು ಮಾಡಿಕೊಡಲಾಗಿತ್ತು. ಡಾ॥ ಶೈಲಜಾ, ಶ್ರೀಮತಿ.ಉಷಾ ಜಿ.ರಾವ್, ಶ್ರೀಸುಬ್ರಮಣ್ಯ, ಮುಂತಾದವರು ಸಂವಾದದಲ್ಲಿ ಭಾಗವಹಿಸಿದ್ದರು. ಶ್ರೀ ರವೀಂದ್ರನಾಥಅವರ ವಂದನಾರ್ಪಣೆಯೊಂದಿಗೆ ಕಾರ್‍ಯಕ್ರಮ ಮುಕ್ತಾಯಗೊಂಡಿತು.

## ೬–೧೨–೨೦೧೭
## ಗಮಕವಾಹಿನಿ–ಮಾಲೆ –೨೩

ಪಂಪಭಾರತ ಸಂಚಿಕೆ –೧೦ (ಮುಂದುವರೆದ ಭಾಗ)

ವಾಚನ: ಕುಮಾರಿ। ರಂಜನಿ

ವ್ಯಾಖ್ಯಾನ : ಡಾ॥ ಸುಷ್ಮಾ ರಘುನಂದನ್

ನೇತೃತ್ವ : ಶ್ರೀಮತಿ ಸಿ.ವಿ. ಶ್ರೀಮತಿ ಗಮಕ ಕಲಾ ಪ್ರತಿಷ್ಠಾನ

ಪಂಪಭಾರತ ಸಂಗ್ರಹ :ಡಾ॥ ಪಿ.ವಿ. ನಾರಾಯಣ




ಗಮಕ ಕಲಾ ಪ್ರತಿಷ್ಠಾನದ ಸಹಯೋಗದಲ್ಲಿ ನಡೆಯುತ್ತಿರುವ ಈ ಹತ್ತನೆ ಸಂಚಿಕೆಯಲ್ಲಿ ಪಾಂಡವರ ವಿರಾಟನಗರ ಪ್ರವೇಶ ಮತ್ತು ಗೋಗ್ರಹಣದ ಪ್ರಸಂಗಗಳನ್ನು ಕುಮಾರಿ ರಂಜನಿ ವಾಚನದ ಮೂಲಕ ಚಿತ್ರಿಸಿದ ರೀತಿ ಸಭಿಕರ ಮೆಚ್ಚುಗೆ ಪಡೆಯಿತು. ಡಾ॥ ಸುಷ್ಮಾ ರಘುನಂದನ್ ಅವರ ಸಂದರ್ಭೋಚಿತ ವ್ಯಾಖ್ಯಾನವು ಕಾರ್‍ಯಕ್ರಮಕ್ಕೆ ಕಳೆಗಟ್ಟಿತು. ಖ್ಯಾತ ಸಂಗೀತ ವಿದ್ವಾಂಸರಾದ ಶ್ರೀ ಅನಂತಮೂರ್ತಿ ಮತ್ತು ಹೆಸರಾಂತ ವ್ಯಾಖ್ಯಾನ ಖಾರರಾದ ಡಾ॥ ರತ್ನಾಮೂರ್ತಿ, ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಕಾರ್ಯಕ್ರಮದ ಆರಂಭದಲ್ಲಿ ಕಲಾವಿದರನ್ನು ಸಭೆಗೆ ಡಾ॥ಪಿ.ವಿ. ನಾರಾಯಣ ಅವರು ಪರಿಚಯಿಸಿದರು. ಡಾ॥ ವಿಜಯಾ ಸುಬ್ಬರಾಜ್ ಎಲ್ಲರಿಗೂ ವಂದಿಸಿದರು.

## ೧೫–೧೨–೨೦೧೭
### "ಅಕ್ಕರಗೊಟ್ಟಿ"– ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : 'ಪಂಪಭಾರತ' ೧೨ ನೇ ಆಶ್ವಾಸ, ೨೮ ನೇ ಪದ್ಯ,

ಚಾಲನೆ : ಡಾ॥ ಎಚ್. ಶಶಿಕಲಾ

ಪದ್ಯ

ಒಗೆದ ಸುತ ಶೋಕದಿಂದಾ<br>
ವಗೆಯಂತೊಳಗುರಿಯೆ ಭೋಂಕನೆರ್ದೆ ತೆಜೆಯಲ್ ಹಾ<br>
ಮಗನೇ ಎಂದಶ್ರುಜಲಾ<br>
ರ್ದ್ರ ಗಂಡನಾ ಗಂಡಿನೊಡನೆ ಬಿಸುಟಂ ಬಿಲ್ಲಂ

ಮೇಲಿನ ಪದ್ಯವು ಒಂದು ಕಂದ ಪದ್ಯವಾಗಿದ್ದು, ಒಂದೇ ಓದಿಗೆ ಈ ಪದ್ಯದಲ್ಲಿ ಜಿಜ್ಞಾಸೆಯಾಗಲೀ, ಕ್ಲೇಶವಾಗಲಿ, ಅರ್ಥೈಸುವಿಕೆಯಲ್ಲಿಯಾಗಲೀ ಏನೂ ಕಷ್ಟವಿಲ್ಲವೆಂದೆನಿಸುತ್ತದೆ.

ಸಂದರ್ಭ: ಸೇನಾಧಿಪತಿ ದ್ರೋಣ ಯುದ್ಧದಲ್ಲಿ ಅಶ್ವತ್ಥಾಮನು ಮಡಿದನೆಂಬ ಸುದ್ದಿ ಕೇಳಿ ಬಿಲ್ಲನ್ನು ಬಿಸುಟು ನುಡಿದ ಕಂದ ಪದ್ಯ.

ಅನ್ವಯಿಸುವಿಕೆ ಮತ್ತು ಪ್ರತಿ ಪದಾರ್ಥದ ದೃಷ್ಟಿಯಿಂದಷ್ಟೇ ನೋಡದೆ, ಈ ಪದ್ಯದಲ್ಲಿ ಅಡಗಿರುವ ಭಾಷೆ, ಭಾವ ಮತ್ತು ಲಯವನ್ನು ಗ್ರಹಿಸಿದರೆ, ದ್ರೋಣನ ಮನಸ್ಥಿತಿಯನ್ನು ಕವಿ ಸಮಯದೊಂದಿಗೆ ಮಾತ್ರ ಓದುಗನು ಗ್ರಹಿಸಬಹುದೆಂದು ಡಾ॥ ಶಶಿಕಲಾ ವಿವರಿಸಿದರು.ಭಾಷಾ ವಿಜ್ಞಾನದ ನೆಲೆ, ಛಂದಸ್ಸಿನ ನೆಲೆ ಮತ್ತು ವ್ಯಾಕರಣದ ನೆಲೆಯಲ್ಲಿ ದ್ರೋಣನ ಮನಸ್ಸಿನಲ್ಲಾಗುತ್ತಿರುವ ಸಂವೇದನೆಗಳನ್ನು ಗುರುತಿಸಿ ಈ ಕಂದ ಪದ್ಯದಲ್ಲಿನ ಭಾವಕ್ಕೂ ಮತ್ತು ಛಂದಸ್ಸಿಗೂ ಇರುವ ಸಂಬಂಧವನ್ನು ರಸವತ್ತಾಗಿ ತಿಳಿಸಿದರು. ಹಳಗನ್ನಡದ ಕವಿಗಳನ್ನು ಮತ್ತು ಅವರ ಕಾವ್ಯಗಳನ್ನು ಅರ್ಥೈಸಿಕೊಂಡು ಆಸ್ವಾದಿಸಬೇಕಿದ್ದರೆ, ಭಾಷೆ, ಭಾವ ಮತ್ತು ಲಯ– ಈ ಮೂರು ಅಗತ್ಯವಿರುವ ಅಂಶವನ್ನು ಮೇಲೆ ಹೇಳಿದ ಕಂದ ಪದ್ಯವನ್ನೇ ವಾಚಿಸಿ ನಿರೂಪಿಸಿದರು.

ಡಾ॥ ವಿಜಯಾ ಸುಬ್ಬರಾಜ್ ಡಾ॥ ಶಶಿಕಲಾ ಅವರನ್ನು ಸಭೆಗೆ ಪರಿಚಯಿಸಿ, ಸ್ವಾಗತಕೋರಿ, ಕಾರ್ಯಕ್ರಮದ ಅಂತ್ಯದಲ್ಲಿ ವಂದನಾರ್ಪಣೆಯನ್ನು ಸಲ್ಲಿಸಿದರು.

**ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ–** (ಸಾಕ್ಷ್ಯಚಿತ್ರ ಪ್ರದರ್ಶನ)

ದಿನಾಂಕ ೧೧ನೇ ಡಿಸೆಂಬರ್ ೨೦೧೭ರಂದು ಕನ್ನಡದ ಕಣ್ವ ಪ್ರೊ. ಬಿಎಂ ಶ್ರೀಕಂಠಯ್ಯ ಅವರ ಬಗ್ಗೆಯ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು.

**ಒಂದನೇ ಪುಟದಿಂದ**

ವಿವಿಧ ಕಾಲಘಟ್ಟಗಳಲ್ಲಿ ಶ್ರೇಷ್ಠ ಗ್ರಂಥಗಳನ್ನು ರಚಿಸಿದ ಕವಿಗಳು, ಅವರ ಕೊಡುಗೆಗಳನ್ನು ಯುವ ಪೀಳಿಗೆಯ ಮತ್ತು ಕನ್ನಡ ಬೋಧನಾ ನಿರತ ವರ್ಗಕ್ಕೆ, ತಿಳಿಸುವ ಪ್ರಯತ್ನವಾಗಿತ್ತು.

ಈ ವಿಚಾರ ಸಂಕಿರಣದ ಯಶಸ್ಸಿಗೆ ಕಾರಣಕರ್ತರಾದ ವಿದ್ವಾಂಸರುಗಳು, ಬಹಳ ಶ್ರಮವಹಿಸಿ, ಪೂರ್ವ ಮತ್ತು ಪೂರ್ಣ ತಯಾರಿಯೊಂದಿಗೆ ಆಗಮಿಸಿ ಮೌಲ್ಯಯುಕ್ತವಾದ ವಿಚಾರಧಾರೆಯನ್ನು ಮಂಡಿಸಿ, ಎಲ್ಲರ ಮೆಚ್ಚುಗೆಗೆ ಪಾತ್ರರಾದರು. ಈ ವಿಚಾರ ಸಂಕಿರಣದ ವಿಷಯವನ್ನು ಯೋಜನೆಯನ್ನು ನಿರೂಪಿಸಿದವರು ಡಾ॥ ಪಿ.ವಿ.ನಾರಾಯಣ.

ಈ ವಿಚಾರ ಸಂಕಿರಣದ ಯಶಸ್ಸಿಗೆ ಕಾರಣ ಕರ್ತರಾದ ವಿದ್ವಾಂಸರುಗಳು ಮತ್ತು ಅವರು ಮಂಡಿಸಿದ ವಿಷಯಗಳು:

**೧) ಶಾಸನಗದ್ಯ– ಡಾ॥ ದೇವರಕೊಂಡಾರೆಡ್ಡಿ, ನಾಡಿನ ಶ್ರೇಷ್ಠ ಲಿಪಿ ಮತ್ತು ಶಾಸನ ತಜ್ಞರು ಮತ್ತು ಅಧ್ಯಕ್ಷರು ಕರ್ನಾಟಕ ಇತಿಹಾಸ ಅಕಾಡೆಮಿ**

ವೇದಗಳ ಭಾಗವಾದ ಗದ್ಯರೂಪದ ಬ್ರಾಹ್ಮಣದಿಂದ ಆರಂಭಮಾಡಿ, ಅಶೋಕನ ಪ್ರಾಕೃತ ಶಾಸನಗಳಲ್ಲಿನ ಗದ್ಯ, ಗಂಗರ, ಕದಂಬರ, ರಾಷ್ಟ್ರಕೂಟರ ಮತ್ತು ನಂತರದ ರಾಜವಂಶರುಗಳ ಶಾಸನಗಳಲ್ಲಿನ ಗದ್ಯಭಾಗದ ಸಾರಾಂಶವನ್ನು ಸೋದಾಹರಣದಿಂದ ನಿರೂಪಿಸಿದರು.

**೨. 'ವಡ್ಡಾರಾಧನೆ' 'ಚಾವುಂಡರಾಯ ಪುರಾಣ'–ಡಾ॥ ಎಚ್.ಎಸ್. ಭುವನೇಶ್ವರ್, ನಿವೃತ್ತ ಕನ್ನಡ ಪ್ರಾಧ್ಯಾಪಕರು, ಕನಕಪುರ ಪ್ರ.ದ. ಕಾಲೇಜು.**

ಕವಿರಾಜಮಾರ್ಗದಲ್ಲಿ ಶ್ರೀವಿಜಯನ್ನು ಚರ್ಚಿಸಿರುವ ಗದ್ಯದ ಸ್ವರೂಪಗಳನ್ನು ವಿವರವಾಗಿ ನೀಡಿ, ನಂತರ ಹಳಗನ್ನಡ ಕಥಾ ಸಂಕಲನ ಕೃತಿಯಾದ ವಡ್ಡಾರಾಧನೆ ಮತ್ತು ಚಾವುಂಡರಾಯ ಪುರಾಣಗಳಲ್ಲಿನ ಭಾಷೆ, ಸಾಂಸ್ಕೃತಿಕ ವಿಚಾರಗಳು, ದೇಶೀಯ ಪರಿಕಲ್ಪನೆ, ನುಡಿಗಟ್ಟುಗಳ ಬಳಕೆ, ಜನಜೀವನ, ನಂಬಿಕೆ, ಆಚಾರ ವಿಚಾರ, ನಡೆನುಡಿಗಳನ್ನು ಯಥೇಚ್ಛವಾಗಿ ಗುರುತಿಸಬಹುದಾದ ಮಾಹಿತಿಯನ್ನು ನೀಡಿದರು.

**೩. ಚಂಪೂ ಕಾವ್ಯಗಳ ಗದ್ಯ –ಡಾ। ಕೆ.ಆರ್. ಗಣೇಶ್ ನಿವೃತ್ತ ಕನ್ನಡ ಪ್ರಾಧ್ಯಾಪಕರು ಮತ್ತು ಶಾಸನ ತಜ್ಞರು**

"ಚಂಪೂ ಕಾವ್ಯಗಳಲ್ಲಿ ಗದ್ಯ" ಎಂಬ ವಿಷಯದ ಬಗ್ಗೆ, ಡಾ। ಗಣೇಶ್ ಅವರು ಪಂಪನ ಆದಿಪುರಾಣ, ಪಂಪರಾಮಾಯಣ, ಚೌಂಡರಸನ ಚಾವುಂಡರಾಯ ಪುರಾಣ, ರುದ್ರಭಟ್ಟನ ಜಗನ್ನಾಥ ವಿಜಯ, ಒಂದನೇ ನಾಗವರ್ಮನ ಕರ್ನಾಟಕ ಕಾದಂಬರಿ, ನಯಸೇನನ ಧರ್ಮಾಮೃತ, ದುರ್ಗಸಿಂಹನ ಪಂಚತಂತ್ರ, ರನ್ನನ ಸಾಹಸ ಭೀಮವಿಜಯ–ಈ ಕಾವ್ಯಗಳಲ್ಲಿನ ಗದ್ಯಭಾಗಗಳಲ್ಲಿನ ಕಥಾನಿರೂಪಣೆ, ಪ್ರಾದೇಶಿಕ ಹಿನ್ನಲೆ, ಆಶಯಗಳು, ರಾಜಾಶ್ರಯದ ಪ್ರಭಾವ, ಇತರ ಕವಿಗಳ ಮತ್ತು ವಿದ್ವಾಂಸರ ಅಭಿಪ್ರಾಯಕ್ಕೆ ಸಿಗುತ್ತಿದ್ದ ಮನ್ನಣೆ, ಶಬ್ದಾಲಂಕಾರದ ಪಾಂಡಿತ್ಯ, ಸಂಸ್ಕೃತ ಶಬ್ದಗಳ ಮತ್ತು ಸಮಾಸಗಳ ಬಳಕೆ, ಶ್ಲೇಷಾಲಂಕಾರ, ಭಾಷೆಯ ತೀಕ್ಷ್ಣತೆ, ಬೈಗುಳಗಳ ವರಸೆ, ಕಥಾನಕ ಗದ್ಯಶೈಲಿ, ನುಡಿಗಟ್ಟು, ಉಪಮೆಗಳ ಬಳಕೆ–ಹೀಗೆ ವಿಷಯಗಳ ನಿರೂಪಣೆಯನ್ನು ಉದಾಹರಣೆಯೊಂದಿಗೆ ನೀಡಿದರು.

ಭೋಜನಾ ನಂತರದ ಗೋಷ್ಠಿಯಲ್ಲಿ ಮೂವರು ವಿದ್ವಾಂಸರು ಉಪಸ್ಥಿತರಿದ್ದು ಮೈಸೂರು ಒಡೆಯರ್ ಕಾಲದವರೆಗಿನ ಕೆಲವು ಕೃತಿಗಳಲ್ಲಿನ ಗದ್ಯದ ವಿಷಯಗಳನ್ನು ಚರ್ಚಿಸಿದರು.

**೧. ಪಂಚತಂತ್ರ ಮತ್ತು ನಯಸೇನನ ಧರ್ಮಾಮೃತ–ಡಾ॥ ಎಸ್.ಎಲ್. ಮಂಜುನಾಥ್**

ಜನಸಾಮಾನ್ಯರಿಗೆ ತಲುಪುವಂತಹ ಮಾಧ್ಯಮವಾದ ಕಥಾ ಸಾಹಿತ್ಯವು ಕ್ರಿ.ಶ ೧೦೩೦ರಲ್ಲಿ ಪ್ರಚಲಿತವಾಗಿದ್ದನ್ನು ತಿಳಿಸುತ್ತಾ, ದುರ್ಗಸಿಂಹನ ಪಂಚತಂತ್ರವು ಪೂರ್ಣವಾಗಿ ಗದ್ಯ ಸಾಹಿತ್ಯವಾಗಿತ್ತು. ಕಥಾನಿರೂಪಣಾ ಶೈಲಿ, ಲೋಕಸತ್ಯಮಾತುಗಳು(ನುಡಿ), ಜಾಣ್ನುಡಿ, ನಾಣ್ಣುಡಿ, ದೇಸಿನುಡಿಗಳು, ಸಮಾನಾರ್ಥ ಪದಗಳ ಬಳಕೆ, (ಶಬ್ದ ಸಂಪತ್ತು) ಇವುಗಳು ಯಥೇಚ್ಛವಾಗಿ ಬಳಕೆಯಾಗಿರುವುದನ್ನು ಗಮನಿಸಬಹುದು ಎಂದು ಅಭಿಪ್ರಾಯ ಪಟ್ಟರು.




ಯತಿ ನಯಸೇನನ ಧರ್ಮಾಮೃತದಲ್ಲಿ ಜೈನ ಮತದ ಹದಿನಾಲ್ಕು ಧರ್ಮಗಳ ಪರಿಚಯ, ವಿರಳವೆನಿಸಬಹುದಾದ ಸಂಸ್ಕೃತ ಶಬ್ದದ ಬಳಕೆ, ಸಮಾಜದ ಬಗ್ಗೆ ಅರಿವನ್ನು ನೀಡುವಂತಹ ಉಪಮೇಯಗಳ ಬಳಕೆ ಮಾಡಿರುವುದನ್ನು ಕೆಲವು ಉದಾಹರಣೆಯೊಂದಿಗೆ ನೀಡಿ, ವಚನಕಾರರ ಮೇಲೆ ಇವನಿಂದ ಆದ ಪ್ರಭಾವವನ್ನು ಗಮನಿಸಬಹುದು ಎಂದು ತಿಳಿಸಿದರು.

**೨. ಹರಿಹರನ ರಗಳೆಗಳ ಗದ್ಯ– ಡಾ॥ ಆರ್. ಲಕ್ಷ್ಮೀನಾರಾಯಣ**

ನಡುಗನ್ನಡ ಕಾಲಮಾನದ ಹರಿಹರ ಮತ್ತು ರಾಘವಾಂಕ (೧೨–೧೩),ಕನ್ನಡವನ್ನು ಚಂಪೂ ಸಂಸ್ಕೃತದ ಮುಷ್ಟಿಯಿಂದ ಬಿಡುಗಡೆ ಮಾಡಿದ ಕೃಷ್ಣ–ಬಲರಾಮರಂತೆ ಎಂಬ ನಾಣ್ನುಡಿ ಉಂಟು.ಹರಿಹರನು ೧೦೮ರಗಳೆಗಳ ಒಡೆಯ. ದೇಸಿ ನುಡಿಗಟ್ಟು, ಉಪಮಾ ಸಮೃದ್ಧಿ, ನಾಟಕೀಯ ನಿರೂಪಣೆ, ಅನುಭವ ನಿರೂಪಣೆ, ಆಡುಮಾತಿನ ಸೊಗಡು, ಪ್ರಾಸ ಅನುಪ್ರಾಸಗಳು, ಲಯಬದ್ಧವಾದ ಉಪಮೇಯಗಳ ಯಥೇಚ್ಛವಾದ ಬಳಕೆ, ವ್ಯಂಗ್ಯ, ವಿಡಂಬನೆ, ಆವೇಶ, ಉದ್ವೇಗ ಬಿಂಬಿಸುವಂತಹ ಪದಗಳ ಬಳಕೆ, ಸಾಮಾನ್ಯರಲ್ಲಿ ಸಾಮಾನ್ಯರಾದ ಜನಗಳನ್ನು ಉಲ್ಲೇಖಿಸಿದ ಕಥೆಗಳು, ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಸಮಾಸಗಳ ರಚನಾ ನೈಪುಣ್ಯತೆ, ಸಂದರ್ಭಗಳ ಚಿತ್ರಣ ಹೀಗೆ ಕೆಲವು ಸಂದರ್ಭಗಳನ್ನು ಉದ್ಧರಿಸಿ ಹೇಳಿದರು. ನಂಬಿಯಣ್ಣನ ರಗಳೆ ಮತ್ತು ಬಸವರಾಜ ದೇವರ ರಗಳೆ ಕಾವ್ಯಗಳಲ್ಲಿ ಬರುವ ಗದ್ಯದ ಬಗ್ಗೆ ತಮ್ಮ ವಿಚಾರವನ್ನು ಮಂಡಿಸಿದರು.

**೩. ಒಡೆಯರ್ ಕಾಲದ ಗದ್ಯ–ವಿಚಾರ ಮಂಡನೆ ಡಾ॥ಎನ್. ಆರ್. ಲಲಿತಾಂಬ**

ಚಿಕ್ಕದೇವರಾಜ ಒಡೆಯರ್ ಮತ್ತು ಮುಮ್ಮಡಿ ಕೃಷ್ಣದೇವರಾಜ ಒಡೆಯರ್ ಅವರುಗಳ ಆಳ್ವಿಕೆಯ ಸಮಯದಲ್ಲಿ ಗದ್ಯ ಸಾಹಿತ್ಯವು ಪುನರ್ ಮೌಲ್ಯಗೊಂಡಿತೆಂಬ ಅಭಿಪ್ರಾಯದೊಂದಿಗೆ ತಮ್ಮ ವಿಚಾರಧಾರೆಯನ್ನು ಪ್ರಾರಂಭಿಸಿದರು. ಇವರ ಕಾಲದಲ್ಲಿ ಪ್ರಮುಖರಾದ ಕೆಂಪುನಾರಾಯಣ ಮತ್ತು ಚಿಕ್ಕುಪಾಧ್ಯಾಯ ಕವಿಗಳ ಮತ್ತು ಅವರ ಕಾವ್ಯಗಳ ಬಗ್ಗೆ ತಮ್ಮ ವಿಚಾರಗಳನ್ನು ಮಂಡಿಸುವುದಾಗಿ ತಿಳಿಸಿದರು. ೧೭–೧೮ನೇ ಶತಮಾನಗಳಲ್ಲಿ ಶೈವ, ವೈಷ್ಣವ ಮತ್ತು ಜೈನ ಧರ್ಮಗಳು ತಮ್ಮ ತಮ್ಮ ಅಸ್ಥಿತ್ವವನ್ನು ಉಳಿಸಿಕೊಳ್ಳಬೇಕಾಗುವಂತಹ ಸ್ಥಿತಿ ನಿರ್ಮಾಣವಾಗಿದುದನ್ನು ವಿವರಿಸಿ ದೇವಚಂದ್ರಕವಿಯು ಗದ್ಯ ಸಾಹಿತ್ಯ ರೂಪದಲ್ಲಿ ಜನರನ್ನು ತಲುಪುವ ಪ್ರಯತ್ನಗಳನ್ನು ನೆನಪಿಸಿದರು.ಮೈಸೂರು ರಾಜರುಗಳು ತಮ್ಮ ವಂಶಾವಳಿಯ ಚರಿತ್ರೆಯನ್ನು ಬರೆಯಲು ಕವಿಗಳಿಗೆ ಒತ್ತಾಯಿಸುವ ಸಂದರ್ಭವಿದ್ದರೆ, ಕವಿಗಳಿಗೆ ಕೆಳವರ್ಗದ ಜನರನ್ನು ತಲುಪುವ ದೃಷ್ಟಿಯಿಂದ ಗದ್ಯ ಸಾಹಿತ್ಯವನ್ನು ರಚಿಸುವ ಕಾಯಕದಲ್ಲಿ ತೊಡಗಿರುವ ಸಂದರ್ಭಗಳನ್ನು ತಿಳಿಸಿದರು. ಸ್ವತಃ ಚಿಕ್ಕದೇವರಾಜ ಒಡೆಯರ್ ಅವರೇ, "ಒಕ್ಕಲಿಗರಿಗಾಗಿ ಮತ್ತು ಒಕ್ಕಲಿಗ ಹೆಣ್ಣು ಮಕ್ಕಳಿಗಾಗಿ ಗದ್ಯರಚನೆ ಮಾಡುತ್ತಿದ್ದೇನೆ" ಎಂಬ ಘೋಷ ವಾಕ್ಯವನ್ನು ಉಲ್ಲೇಖಿಸಿದರು.ಈ ನಿಟ್ಟಿನಲ್ಲಿ ಜೈನ ಕವಿ ದೇವ ಚಂದ್ರನು ಗದ್ಯ ಸಾಹಿತ್ಯವು ಜನರನ್ನು ತಲುಪುವ ಕೆಲಸ ಮಾಡಿ ಯಶಸ್ಸನ್ನು ಪಡೆದಿದ್ದಾನೆ ಎಂಬ ಅಭಿಪ್ರಾಯ ವ್ಯಕ್ತವಾಯಿತು.

**೭ನೇ ಪುಟಕ್ಕೆ**




**ತೊತ್ತು:** ಇದೊಂದು ದ್ರಾವಿಡ ಪದ; ಇದರ ಹಳಗನ್ನಡ ರೂಪ 'ತೊೞ್ತು' ಎಂದು. ತಮಿಳಿನಲ್ಲಿದು ತೊೞುತ್ತೈ, ತೊತ್ತು ಎಂಬ ರೂಪಗಳಲ್ಲಿಯೂ, ತೆಲುಗಿನಲ್ಲಿ ತೊತ್ತು ಎಂಬುದಾಗಿಯೂ ಸಿಕ್ಕುತ್ತದೆ. ಇದರ ಮೂಲ 'ತೊೞಿಲ್' ಎಂದರೆ ಕೆಲಸ (ಮಲಯಾಳಂ ಮತ್ತು ತುಳುಗಳಲ್ಲಿ ಕೆಲಸ ಎಂಬರ್ಥದಲ್ಲಿ ಈ ಶಬ್ದದ ಬಳಕೆಯಿದೆ).'ತೊೞಿಲ್' ಅನ್ನು ಮಾಡುವವನೇ 'ತೊೞ್ತು'. ಈ ಶಬ್ದವು ಪುಲ್ಲಿಂಗ ಸ್ತ್ರೀಲಿಂಗಗಳೆರಡರಲ್ಲೂ ಒಂದೇ ಆಗಿದೆ: "ತೊೞ್ತೆಂದು ದಾಸನುಂ ದಾಸಿಯುಮಕ್ಕುಂ" ('ಶಬ್ದಮಣಿದರ್ಪಣ'). ತೊೞ್ತು ಮಾಡುವ ಕೆಲಸವೇ 'ತೊೞ್ತುವೆಸ' ("ಎನಗೆಡೆಮಡಗದೆ ಬೆಸಪ ತೊೞ್ತುವೆಸನಂ ಬೆಸಸಿಂ" – 'ಪಂಪಭಾರತ') ಅಥವಾ ತೋೞ್ತುಗೆಲಸ ("ತೊೞ್ತುಗೆಲಸಕ್ಕರಮನೆಯಂ ಪುಗುವ ಪೊಱಮಡುವ" – ದುರ್ಗಸಿಂಹನ 'ಪಂಚತಂತ್ರ').

ಆರ್ಥಿಕ ಅಥವಾ ಇತರ ಕಾರಣಗಳಿಗಾಗಿ ತನ್ನನ್ನು ಒಬ್ಬರಿಗೆ ಸಂಪೂರ್ಣವಾಗಿ ಸಮರ್ಪಿಸಿಕೊಳ್ಳುವುದೇ ತೊತ್ತಿನ ಲಕ್ಷಣ. "ತೊತ್ತಿಂಗೆ ಲಕ್ಷಣವೇಕಯ್ಯ? ಅವರೊಕ್ಕುದನುಂಡು ಮಿಕ್ಕುದ ಕಾಯ್ದುಕೊಂಡಿಪ್ಪುದು" ಎಂಬುದು ಬಸವಣ್ಣನ ವಚನದ ಮಾತು. ಹಲವು ವೇಳೆ ಮಕ್ಕಳನ್ನು ತೊತ್ತುಗಳಾಗಿ ಬಿಡುತ್ತಿದ್ದರು. ಇಂತಹವರನ್ನು 'ಬೞಿದೊತ್ತು' [ಬೞಿ=ವಂಶ] ಎನ್ನುತ್ತಿದ್ದರು. ಹರಿಹರನ 'ನಂಬಿಯಣ್ಣನ ರಗಳೆ'ಯಲ್ಲಿ "ತಾವಿವರ್ಗೆ ವಂಶಾವಳಿಯಲಿ ಬಂದ ಬಳಿದೊತ್ತಿರ ಮಕ್ಕಳಾದ ಕಾರಣ" ಎಂಬ ಮಾತಿದೆ.

ತೊತ್ತುಗಳ ಮೇಲೆ ಸಂಪೂರ್ಣ ಹಕ್ಕಿರುತ್ತಿದ್ದುದರಿಂದ ಒಡೆಯರು ಹೆಣ್ಣುದೊತ್ತುಗಳನ್ನು ಲೈಂಗಿಕವಾಗಿಯೂ ಬಳಸಿಕೊಳ್ಳುತ್ತಿದ್ದುದರಿಂದ ಅಂತಹವರ ಮಕ್ಕಳನ್ನು 'ತೊೞ್ಬುಟ್ಟಿ' ಎನ್ನುತ್ತಿದ್ದರು ("ವಿದುರನೆಂಬೀ ತೊೞ್ಬುಟ್ಟಿಯ ಮನೆಯ ಕೂೞ್ ನುಡಿಯಿಸೆ" – 'ಪಂಪಭಾರತ'). ತೊತ್ತುಗಳನ್ನು ಕಾಣಿಕೆಯಾಗಿ ಕೊಡುವ ಪದ್ಧತಿ ತೀರ ಹಳೆಯದು. ರೆಬ್ಬಕಬ್ಬೆ ಎನ್ನುವವಳು ತನ್ನ ತೊತ್ತು ಮಾಚಬ್ಬೆಯನ್ನು ಸಕಳೇಶ್ವರ ದೇವರಿಗೆ (ದೇವಸ್ಥಾನದ ಕೆಲಸಗಳನ್ನು ಮಾಡಲು) ಕಾಣಿಕೆ ಕೊಟ್ಟ ಉಲ್ಲೇಖ 11ನೆಯ ಶತಮಾನದ ಶಾಸನವೊಂದರಲ್ಲಿದೆ.

'ಕೂರ್ಪ ತಾಯಂ ಮಾಱಿ ತೊತ್ತ ಕೊಂಬಂತೆ' ಎಂಬ ಗಾದೆಯ ಉಲ್ಲೇಖ ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ದಲ್ಲಿದೆ.ತೊತ್ತುಗಳನ್ನು ಸಂತೆಯಲ್ಲಿ ಮಾರುತ್ತಿದ್ದ ಅಂಶ ಶಾಸನೋಕ್ತವಾಗಿದೆ. ಹರಿಶ್ಚಂದ್ರನು ತನ್ನ ಹೆಂಡತಿಯನ್ನು ಕಾಶಿಯ ಬ್ರಾಹ್ಮಣನೊಬ್ಬನಿಗೆ ಮಾರಿದ ಪ್ರಸಂಗವೂ ಅದೇ ಕಾವ್ಯದಲ್ಲಿದೆ.

=====

**ದಂಡ:** ಇದು ಸಂಸ್ಕೃತ ಶಬ್ದ. ದಂಡ ಎಂದರೆ ಕೋಲು. 'ಪಂಪಭಾರತ'ದಲ್ಲಿ ಉದ್ದವಾದ ಕೋಲನ್ನು 'ದಂಡಕಾಷ್ಠ' ಎಂದಿದ್ದರೆ ("ದಂಡಕಾಷ್ಠದ ತುದಿಯೊಳ್ ಪಳಂಚಲೆಯೆ ಕೋವಣಮಂ ಕಟ್ಟಿ"), ಚಿಕ್ಕ ಕೋಲನ್ನು 'ಸುಕುಮಾರ ಚರಿತೆ'ಯು 'ದಂಡಖಂಡ' ಎನ್ನುತ್ತದೆ. ("ದಂಡಖಂಡಾಘಾತದೊಳು"). ಬಂಧುವರ್ಮನ 'ಜೀವಸಂಬೋಧನೆ'ಯಲ್ಲಿ "ಊಱುವ ದಂಡವೆರಸು" ಎಂಬಲ್ಲಿ ಊರೆಗೋಲು ಸೂಚಿತವಾಗಿದೆ.

ತಕ್ಕಡಿಯ ಕೋಲನ್ನು 'ತುಲಾದಂಡ'ವೆನ್ನುತ್ತಿದ್ದರು. "ಧರೆಯಱಿಯಲೊಡಂ ತೂಗಲ್ ಧರೆಗೆ ತುಲಾದಂಡಮಲ್ತೆ ಮದ್ಭುಜದಂಡಂ" ಎಂಬ ಮಾತು 'ಆದಿಪುರಾಣ'ದಲ್ಲಿದೆ.ನಾಲ್ಕು ಮೊಳದ ಅಳತೆಯನ್ನು 'ವ್ಯವಹಾರ ಗಣಿತ'ವು ದಂಡ ಎಂಬ ಹೆಸರಿನಿಂದ ಕರೆಯುತ್ತದೆ.ಸನ್ಯಾಸಿಗಳು ಹಿಡಿದುಕೊಳ್ಳುವ ಕೋಲನ್ನೂ 'ದಂಡ' ಎಂಬ ಶಬ್ದವು ಸೂಚಿಸುತ್ತದೆ. ಹಾಗೆಯೇ ಅಧಿಕಾರದ ಸೂಚಕವಾಗಿ 'ದಂಡ' ಬಳಕೆಯಲ್ಲಿದೆ. ಸೈನ್ಯವನ್ನೂ 'ದಂಡ' ಎನ್ನುತ್ತಿದ್ದರು ("ನೃಪಸೇನೆಯೊಳಂ ದಂಡಂ" – 'ಅಭಿಧಾನ ವಸ್ತುಕೋಶ'). ಅದಕ್ಕೇ ಸೇನೆಯ ನಾಯಕನನ್ನು 'ದಂಡನಾಯಕ' ಅಥವಾ 'ದಂಡನಾಥ' ಎನ್ನುತ್ತಿದ್ದುದು.

ಪ್ರಾಯಶಃ ಕೋಲಿಗೂ ಹೊಡೆಯುವಿಕೆಗೂ ಇರುವ ಸಂಬಂಧದಿಂದಾಗಿ ದಂಡ ಎಂದರೆ ಶಿಕ್ಷೆ ಎಂಬರ್ಥ ಪ್ರಾಪ್ತವಾಗುತ್ತದೆ. ಮರಣದಂಡನೆಯನ್ನು ವಚನಗಳು 'ತಲೆದಂಡ' ಎನ್ನುತ್ತವೆ.ಹೀಗೆ ಶಿಕ್ಷೆ ಕೊಡಬಲ್ಲ ಅಧಿಕಾರಿಯೇ ದಂಡಧರ ("ಮತ್ತಂ ದಂಡಧರರಿಲ್ಲದಂದು ತಂತಮ್ಮ ವೃತ್ತಿಗಳಂ ಪ್ರಜೆಗಳತಿಕ್ರಮಿಸಿ ನಡೆಗುಮೆಂದು" ಎಂಬುದು ಪಂಪನ 'ಆದಿಪುರಾಣ'ದ ಮಾತು. ಅತ್ಯಂತ ದೊಡ್ಡ ಶಿಕ್ಷೆಗಾರ ಯಮನಾದ್ದರಿಂದ ಅವನನ್ನು 'ದಂಡಪಾಣಿ' ಎನ್ನುತ್ತವೆ ಕಾವ್ಯಗಳು ("ಕೋದಂಡಪಾಣಿಗಳ್ ದಂಡಪಾಣಿಗೆಣೆಯೆನೆ ತಳರ್ದರ್" – 'ಪಂಪರಾಮಾಯಣ).ಶಿಕ್ಷಿಸುವ ಅಧಿಕಾರವೇ 'ದಂಡನೀತಿ' ಅಥವಾ ರಾಜನೀತಿ."ನಿನ್ನ ದಂಡನೀತಿಯ ಪುದುವೆ ವಲಂ ದಂಡರತ್ನಮೆಂಬುದು ಪೆಱತೇ" ಎಂದೂ ಅಲ್ಲಿಯೇ ಬಳಕೆಯಾಗಿದೆ. ದಂಡನೆಗೊಳಗಾಗುವುದು 'ದಂಡಂಗೊಳ್ಳು'ವುದು ("ಲೆಂಕರ್ ದಂಡಗೊಂಡರಂತೆ ಶಂಕಿಸುತ್ತುಂ" – 'ಧರ್ಮಾಮೃತ'). ಜುಲ್ಮಾನೆಯನ್ನೂ ದಂಡ ಎಂಬ ಶಬ್ದವೇ ಸೂಚಿಸುತ್ತದೆ.

## "ಶ್ರೀ" ಅವರ ಶ್ರೀ ಕಾರ್ಯ

(ಬಿ.ಎಂ.ಶ್ರೀಕಂಠಯ್ಯ ಅವರ ಜನ್ಮ ದಿನದ ಸವಿಸ್ಮೃತಿ)

ಶ್ರೀ ಕರಿವದನನ ಕೂರ್ಮೆಯ ಕಡಲಲಿ ಮಿಂದಾತ
ಶ್ರೀ ಕರ್ನಾಟಕ ಮಾತೆಯ ನಂದನ ಧನ್ಯಾತ್ಮ ॥
ಶ್ರೀಕಂಠನ ವರಭಕ್ತ ಕುಟುಂಬದ ಪುಣ್ಯಾತ್ಮ
ಶ್ರೀಕಂಠನ ನಾಮಾಂಕಿತ ಪಡೆದ ಶ್ರೇಷ್ಠಾತ್ಮ॥
ಶ್ರೀ ಕೃಷ್ಣರಾಜ ಒಡೆಯರ ಮನ್ನಣೆ ಪಡೆದಾತ್ಮ.
ಶ್ರೀಕಾರ ಬರೆದು ಚಳುವಳಿಗೆ ತುಂಬಿದರು ಧೈರ್ಯ॥
"ಶ್ರೀ" ಕಾರದಂಕಿತದಿ ಕೀರ್ತಿ ಪಡೆದ ಕವಿವರ್ಯ
ಶ್ರೀಕಾರ್ಯ ಗೈದ "ಕನ್ನಡ ಕಣ್ವ" ರೆನಿಪ ಆರ್ಯ ॥
"ಶ್ರೀ" ಯವರು ಆಧುನಿಕ ಕನ್ನಡ ಆಚಾರ್ಯ"
"ಶ್ರೀ" ಯವರು "ರಾಜ್ಯ ಸೇವಾಸಕ್ತ" ಪ್ರಾಚಾರ್ಯ॥
ಶ್ರೀಯುತರ ಧ್ಯೇಯಾದರ್ಶ, ಸೇವೆ, ಮನೋಸ್ಥೈರ್ಯ
ಶ್ರೀಯನು ಪಡೆಯ ಅನುಸರಣೆ ಅನಿವಾರ್ಯ/

"ಶ್ರೀರಾಮ"
ನಾರಸಂದ್ರ ರಾಮಚಂದ್ರಯ್ಯ

**ಪ್ರತಿಷ್ಠಾನವು ಓಲೆಗರಿಗಳ ಮತ್ತು ಕಾಗದ ಹಸ್ತಪ್ರತಿಗಳ ಸಂರಕ್ಷಣೆ ಮತ್ತು ದಾಖಲೀಕರಣದ ಕಾರ್ಯವನ್ನು ನಿರ್ವಹಿಸುತ್ತಿದೆ. ಆಸಕ್ತರು ಹಸ್ತಪ್ರತಿ ವಿಭಾಗವನ್ನು ಸಂಪರ್ಕಿಸಬೇಕೆಂದು ಕೋರುತ್ತೇವೆ.**

## ಬಿ.ಎಂ.ಶ್ರೀ ಪ್ರತಿಷ್ಠಾನದ ಕಚೇರಿ ಭಾನುವಾರಗಳಂದು ತೆರೆದಿರುತ್ತದೆ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಚೇರಿ ಹಾಗೂ ಇತರ ಸೇವೆಗಳು ಭಾನುವಾರದಂದು ಸಾರ್ವಜನಿಕರಿಗೆ, ಸದಸ್ಯರಿಗೆ ಹಾಗೂ ಸಾಹಿತ್ಯಾಸಕ್ತರಿಗೆ ಲಭ್ಯ ಮಾಡಿಕೊಡುವ ಉದ್ದೇಶದಿಂದ ವಾರದ ರಜಾ ದಿನವನ್ನು ಬದಲಿಸಲಾಗಿದೆ. ಇನ್ನು ಮುಂದೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಚೇರಿ ಹಾಗೂ ಇತರ ಸೇವೆಗಳು ಪೂರ್ಣಪ್ರಮಾಣವಾಗಿ ಭಾನುವಾರ ಬೆಳಿಗ್ಗೆ 10.00 ಯಿಂದ ಸಂಜೆ 5.00 ವರೆಗೆ ಲಭ್ಯವಿರುತ್ತದೆ. ಇನ್ನು ಮುಂದೆ ಪ್ರತಿ ಮಂಗಳವಾರ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಚೇರಿಗೆ ವಾರದ ರಜೆಯಿರುತ್ತದೆ.

## ಪ್ರೊ. ಕೆ. ಇ. ರಾಧಾಕೃಷ್ಣ



ನಾಡಿನ ಹೆಸರಾಂತ ಶಿಕ್ಷಣತಜ್ಞರು. ಬೆಂಗಳೂರಿನ ಶೇಷಾದ್ರಿಪುರ ಕಾಲೇಜಿನ ಹಾಗೂ ಜಯನಗರದ ಸುರಾನ ಕಾಲೇಜಿನ ಪ್ರಾಂಶುಪಾಲರು ಆಗಿದ್ದು ಶ್ರೀಯುತ ರಾಧಾಕೃಷ್ಣ ಅವರು ಬಹುಮುಖ ಪ್ರತಿಭೆ. ಇಂಗ್ಲೀಷ್ ಭಾಷೆಯ ಪ್ರಾಧ್ಯಾಪಕರಾಗಿ ಉತ್ತಮ ವಾಗ್ಮಿಗಳಾಗಿ ಸಾವಿರಾರು ವಿದ್ಯಾರ್ಥಿಗಳಿಗೆ ಬೋಧನೆ ಮಾಡಿ ಅನೇಕರಿಗೆ ಸನ್ಮಾರ್ಗ ತೋರಿಕೊಟ್ಟವರು. ಅತ್ಯಂತ ಪ್ರತಿಭಾನ್ವಿತವೆನಿಸುರುವ ರಾಧಾಕೃಷ್ಣ ಅವರ ಬಳಗ ಬಹಳ ದೊಡ್ಡದು. ಶ್ರೀಯುತರ ಸೇವೆಯನ್ನು ಗಮನಿಸಿದ ಸರ್ಕಾರ ೨೦೦೫ರಲ್ಲಿ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ. ಕೆಂಪೇಗೌಡ ಪ್ರಶಸ್ತಿಯು ಸೇರಿದಂತೆ ಪ್ರತಿಷ್ಠಿತ ಗೌರವಗಳಿಗೆ ಶ್ರೀಯುತರು ಪಾತ್ರರಾಗಿದ್ದಾರೆ. ಸದ್ಯ ಅವರು ಈಗ ಶಿಕ್ಷಣ ತಜ್ಞರಲ್ಲದೆ ರಾಜಕೀಯ ಪಟುವೂ ಹೌದು. ರಾಜ್ಯ ಕಾಂಗ್ರೆಸ್‌ನ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ವಿಶೇಷವೆಂದರೆ ರಾಧಾಕೃಷ್ಣ ಕವಿಗಳು, ಸಾಹಿತಿಗಳೂ, ವ್ಯಾಖ್ಯಾನಕಾರರು ಆಗಿರುವರು.

## ಶ್ರೀ ಎಂ.ಆರ್. ಸತ್ಯನಾರಾಯಣ

ಗಮಕ ವಿದ್ವಾನ್ ಎಂ.ಆರ್.ಸತ್ಯನಾರಾಯಣ ಅವರು ದಿನಾಂಕ ೨೫-೦೬-೧೯೫೦ರಲ್ಲಿ ಜನಿಸಿದರು. ಹಾಗೂ ನಾಡಿನ ಹೆಸರಾಂತ ಗಮಕಿ ಎಂ. ರಾಘವೇಂದ್ರರಾವ್ ಅವರು ಇವರ ತಂದೆ-ಅವರು ಕರ್ನಾಟಕ ಗಮಕ ಕಲಾಪರಿಷತ್ತು ಸಂಸ್ಥಾಪಕರು. ಶ್ರೀಯುತರಿಗೆ ರಾಜ್ಯೋತ್ಸವ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ, ಸಂಗೀತ ನೃತ್ ಅಕಾಡೆಮಿ ಪ್ರಶಸ್ತಿ, ಉಡುಪಿಯ ಶ್ರೀ ಕೃಷ್ಣಾನುಗ್ರಹ ಪ್ರಶಸ್ತಿ ಇನ್ನೂ ಹಲವಾರು ಪ್ರಸಸ್ತಿಗಳು ಬಂದಿವೆ. ಆಕಾಶವಾಣಿಯಲ್ಲಿ ಕಾರ್ಯಕ್ರಮದ ನಿರ್ವಾಹಕರಾಗಿದ್ದರು.ಮತ್ತು ಕಾವ್ಯಪ್ರಚಾರವನ್ನು ಕೂಡ ಮಾಡಿರುತ್ತಾರೆ. ನಾಟಕ, ಸಂದರ್ಶನ (ಆಕಾಶವಾಣಿ), ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಹಯೋಗದೊಡನೆ ಪ್ರಾಯೋಜಿತ ಕಾರ್ಯಕ್ರಮ, ವಿಶೇಷ ಕಾರ್ಯಕ್ರಮಗಳ ಪರಿಕಲ್ಪನೆ, ರಚನೆ, ನಿರ್ದೇಶನ, ಗಮಕಿ ರಾಘವೇಂದ್ರರಾಯರಿಂದ ಸ್ಥಾಪನೆಗೊಂಡ ಕಾವ್ಯ ಗಾಯನ ಕಲಾ ಮಂದಿರ ಸಂಸ್ಥೆಯ ಕಾರ್ಯದರ್ಶಿ ಮಂದಿರದ ವತಿಯಿಂದ ಕಲಾಮಂದಿರದ ವತಿಯಿಂದ ಕಲಾ ಮಂದಿರದ ೪೦ನೇ ವಾರ್ಷಿಕೋತ್ಸವ ಹಾಗೂ ಇಸವಿ ೨೦೦೦ರಲ್ಲಿ ಗಮಂ ಎಂ. ರಾಘವೇಂದ್ರರಾಯರ ಸಂಸ್ಮರಣ ದಿನಾಚಾರಣೆ -ರಾಜ್ಯಮಟ್ಟದಲ್ಲಿ ಪ್ರತಿಭಾ ಅನ್ವೇಷಣೆ, ಹಿರಿಯರಿಗೆ ಸನ್ಮಾನ, ನಾಡಿನ ಹಿರಿಯ ಸಾಹಿತ್ಯ-ಸಂಗೀತ ವಿದ್ವನ್ಮಣಿಗಳು ಭಾಗವಹಿಸಿದರು.

ಶ್ರೀಯುತರು ಶೀರ್ಷಗಾರರಾಗಿ ಸಂದರ್ಶನ, ಲೇಖನಗಳೂ, ಇನ್ನೂ ಮುಂತಾದ ಚಟುವಟಿಕೆಗಳನ್ನು ಒಳಗೊಂಡಿರುತ್ತಾರೆ.

## ಪ್ರಕಟಣೆ

### ಶ್ರೀ ಕೆ.ಮೋಹನ್ ದೇವ್ ಆಳ್ವ- ಡಾ.ಎಂ.ಕೆ.ಶೈಲಜ ಆಳ್ವ ಭಾವಗೀತೆ ಸ್ಪರ್ಧೆ

ಶ್ರೀ ಕೆ.ಮೋಹನ್ ದೇವ್ ಆಳ್ವ- ಡಾ.ಎಂ.ಕೆ.ಶೈಲಜ ಆಳ್ವ ದತ್ತಿ ಸ್ಪರ್ಧೆಯನ್ನು ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು 13ರಿಂದ 25 ವರ್ಷ ವಯಸ್ಸಿನವರಿಗೆ 'ಭಾವಗೀತೆ ಸ್ಪರ್ಧೆಯನ್ನು' ಏರ್ಪಡಿಸಿದೆ. ಈ ಗಾಯನ ಸ್ಪರ್ಧೆಯಲ್ಲಿ ಪಾಲ್ಗೊಳ್ಳಲು ಬಯಸುವವರು ದಿನಾಂಕ : 20-1-2018ರೊಳಗೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, 3ನೇ ಮುಖ್ಯರಸ್ತೆ, ಎನ್. ಆರ್. ಕಾಲೋನಿ, ಬೆಂಗಳೂರು-560019, ಇಲ್ಲಿ ಹೆಸರನ್ನು ನೋಂದಾಯಿಸಿ ಕೊಳ್ಳಬೇಕು. ದಿನಾಂಕ : 28-1-2018, ಭಾನುವಾರ ಬೆಳಗ್ಗೆ 10-30ಗಂಟೆಗೆ ನಡೆಯುವ ಸಮಾರಂಭದಲ್ಲಿ ವಿಜೇತರಿಗೆ ನಗದು ಬಹುಮಾನಗಳನ್ನು ನೀಡಲಾಗುವುದು.

ದೂರವಾಣಿ : 080-26615877/080-26676773

## ಶ್ರೀ ಕೆ. ಮೋಹನ್ ದೇವ್ ಆಳ್ವ



ಆಚಾರ್ಯ ಪಾಠಶಾಲಾ ಶಿಕ್ಷಣ ದತ್ತಿಯ ಟ್ರಸ್ಟಿ ಮತ್ತು ಮೆಂಟಾರ್, ಬೆಂಗಳೂರು ಗಾಯನ ಸಮಾಜದ ಟ್ರಸ್ಟಿ, ಶ್ರೀ ಕಂಠೀರವ ಫಿಲ್ಮ್ ಸ್ಟೂಡಿಯೋದ ನಿರ್ದೇಶಕರು.ಭಾರತ ಫ್ರಾನ್ಸ್ ಸಾಂಸ್ಕೃತಿಕ ಸಂಘ, ಬೆಂಗಳೂರು, ಕರ್ನಾಟಕ ವಲಯದ ಅಧ್ಯಕ್ಷರು ಬೆಂಗಳೂರು ಮಹಾನಗರ ಪಾಲಿಕೆಯ ಕಾರ್ಪೊರೇಟರ್ ಆಗಿದ್ದರು. ಭಾರತ ಸರ್ಕಾರದ ಫಿಲ್ಮ್ ಸೆನ್ಸಾರ್ ಬೋರ್ಡಿನ ಕರ್ನಾಟಕ ವಲಯದ ಸದಸ್ಯರು ಆಗಿದ್ದರು.

## ಡಾ|| ಎಂ.ಕೆ. ಶೈಲಜಾ ಆಳ್ವ

ಮಕ್ಕಳ ತಜ್ಞರು ಕರ್ನಾಟಕ ಸರ್ಕಾರದ ಆರೋಗ್ಯ ಇಲಾಖೆಯಲ್ಲಿ ಸೀನಿಯರ್ ಸ್ಪೆಷಲಿಸ್ಟ್ ಆಗಿದ್ದರು. ಕರ್ನಾಟಕ ಸರ್ಕಾರದ ಆರೋಗ್ಯ ಇಲಾಖೆಯಲ್ಲಿ ರಕ್ತನಿಧಿ (ಬ್ಲಡ್ ಬ್ಯಾಂಕ್)ಗಳನ್ನು ಸ್ಥಾಪಿಸಿ, ಬೆಳಸುವಲ್ಲಿ ಹೆಚ್ಚಿನ ಕಾರ್ಯವನ್ನು ಮಾಡಿದ್ದರು.

## ಪುಸ್ತಕ ಬಿಡುಗಡೆ

ದಿನಾಂಕ 16.12.2017 ರಂದು ನಮ್ಮ ಸದಸ್ಯರಾದ ಸಂಶೋಧಕಿ ಡಾ.ಇಂದಿರಾ ಹೆಗ್ಗಡೆ ಅವರ ಪ್ರವಾಸ ಕಥನ "ಸಪ್ತ ಕನ್ಯೆಯರ ಕನ್ಯೆ ಭೂಮಿಯಲ್ಲಿ ನಮ್ಮ ನಡೆ" ಕೃತಿ ಯು ಡಾ.ವಿಜಯಾ ಅವರು ರವೀಂದ್ರ ಕಲಾಕ್ಷೇತ್ರದಲ್ಲಿ ಲೋಕಾರ್ಪಣೆಗೊಳಿಸಿದರು.

೫ನೇ ಪುಟದಿಂದ

ಬದುಕಿನ ವೈವಿಧ್ಯತೆಯ ಚಿತ್ರಣ, ಮಡಿವಂತಿಕೆ ಇಲ್ಲದ ಭಾಷೆ, ಕಂದಾಯ ಹೆಚ್ಚಳದ ಬಗ್ಗೆ ವಿರೋಧ ವ್ಯಕ್ತಪಡಿಸುವಿಕೆ, ಇವೆಲ್ಲವನ್ನೂ ಕಾಣಬಹುದೆಂದರು.

ವಿಚಾರ ಸಂಕಿರಣದ ಪ್ರಾರಂಭದಲ್ಲಿ ಡಾ|| ಪಿ.ವಿ.ನಾರಾಯಣ ಅವರು ಈ ವಿಚಾರ ಸಂಕಿರಣದ ಅಗತ್ಯ ಮತ್ತು ಉಪಯುಕ್ತತೆ, ಉಪನ್ಯಾಸಕರ ಮತ್ತು ವಿಚಾರಗಳನ್ನು ಆರಿಸುವ ಬಗ್ಗೆ ಮತ್ತು ಪ್ರೊ.ಬಿ.ರಾಮಸ್ವಾಮಿ ಮತ್ತು ಶ್ರೀ ಎಂ.ಎ. ರಾಮಾನುಜ ಐಯ್ಯಂಗಾರ್, ಇವರಿಬ್ಬರಿಗೂ ಹಳಗನ್ನಡ ಕಾವ್ಯಗಳ ಬಗ್ಗೆ ಇದ್ದ ಪ್ರೀತಿ ಮತ್ತು ಒಲವನ್ನು, ತಮ್ಮ ಪ್ರಾಸ್ತಾವಿಕ ನುಡಿಗಳಲ್ಲಿ ವ್ಯಕ್ತಪಡಿಸಿದರು.ಈ ವಿಚಾರ ಸಂಕಿರಣದ ಸದುಪಯೋಗವನ್ನು ಕನ್ನಡ ವಿದ್ಯಾರ್ಥಿಗಳು ಕನ್ನಡ ಉಪನ್ಯಾಸಕರು ಮತ್ತು ನಾಗರೀಕರು ಪಡೆಯಲೆಂಬ ಉದ್ದೇಶದಿಂದ ಆಯೋಜಿಸಿರುವುದಾಗಿ ತಿಳಿಸಿದರು.

ವಿಚಾರ ಮಂಡನೆ ಮಾಡುವ ಆರು ಜನ ವಿದ್ವಾಂಸರನ್ನು, ವಿಚಾರ ಸಂಕಿರಣದಲ್ಲಿ ಭಾಗವಹಿಸಲು ಬಂದಿರುವ ವಿದ್ಯಾರ್ಥಿಗಳನ್ನೂ ಬೋಧಕರನ್ನೂ ಮತ್ತು ದತ್ತಿ ದಾನಿಗಳ ಕುಟುಂಬವರ್ಗದವರನ್ನೂ ಸ್ವಾಗತಿಸಿದರು.

ಡಾ|| ವಿಜಯಾ ಸುಬ್ಬರಾಜ್ ಅವರ ವಂದನಾರ್ಪಣೆಯೊಂದಿಗೆ ವಿಚಾರ ಸಂಕಿರಣವು ಯಶಸ್ವಿಯಾಗಿ ಸಂಪನ್ನಗೊಂಡಿತು.



"ಅಕ್ಕರಗೊಟ್ಟಿ"- ತಿಂಗಳ ಮುಕ್ತ ಸಂಸ್ಕೃತಿ ಚಿಂತನ ಕಾರ್ಯಕ್ರಮದಲ್ಲಿ ಡಾ|| ಶಶಿಕಲಾ ಅವರನ್ನು ಪ್ರತಿಷ್ಠಾನದ ಕಾರ್ಯದರ್ಶಿಯಾದ ಡಾ|| ವಿಜಯಾ ಸುಬ್ಬರಾಜ್ ಸಭೆಗೆ ಪರಿಚಯಿಸಿದರು.

ಕಿರು ಪರಿಚಯ

## ಪ್ರೊ. ಎಲ್.ಎಸ್. ಶೇಷಗಿರಿ ರಾವ್ (ಜನನ ೧೯೨೫ ಫೆಬ್ರುವರಿ ೧೬)



ಶ್ರೀಯುತರು, ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ.(ಗೌರವ) ಪದವಿ ಪರೀಕ್ಷೆಯಲ್ಲಿ ಪ್ರಥಮ ತರಗತಿಯಲ್ಲಿ ಉತ್ತೀರ್ಣರಾದರು.

ಶ್ರೀಯುತರು ಬಿಎಂಶ್ರೀ ಅವರ ವಿದ್ಯಾರ್ಥಿಯಾಗಿದ್ದರು. ಎಚ್.ವಿ. ನಂಜುಂಡಯ್ಯ ಚಿನ್ನದ ಪದಕ ಪಡೆದ ಮೊದಲ ವಿದ್ಯಾರ್ಥಿ ಇವರು. ತದನಂತರ ಬೆಂಗಳೂರು ಇಂಟರಮೀಡಿಯೆಟ್ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕರಾದರು. ೧೯೪೮ರಲ್ಲಿ ಶೇಷಗಿರಿರಾವ್ ಅವರ ಮೊದಲ ಕಥಾಸಂಕಲನ "ಇದು ಜೀವನ" ಪ್ರಕಟವಾಯಿತು. ಕನ್ನಡ ಸಾರಸ್ವತಲೋಕದಲ್ಲಿ ತಮ್ಮದೆ ಒಂದು ಛಾಪನ್ನು ಸ್ಥಾಪಿಸಿರುವ ಎಲ್. ಎಸ್. ಎಸ್, ಕನ್ನಡವನ್ನು ಬೆಳೆಸುವ ನಿಟ್ಟಿನಲ್ಲಿ ಮಾಡಿರುವ ಕಾರ್ಯಗಳು ನಿಜಕ್ಕೂ ಶ್ಲಾಘನೀಯ. ನೂರಾರು ಚಿಕ್ಕ-ಪುಟ್ಟ ಹೊತ್ತಿಗೆಗಳನ್ನು ಅವರ ರಾಷ್ಟ್ರೀಯ ಉತ್ಥಾನ ಪರಿಷತ್, ವತಿಯಿಂದ ಪ್ರಕಟಿಸಿದ್ದಾರೆ.ಇದು ಮಕ್ಕಳ ಜ್ಞಾನವರ್ಧನೆಗೆಂದು ಹಮ್ಮಿಕೊಂಡ ಕೆಲಸವಾಗಿತ್ತು. ಈ ಪುಸ್ತಕಗಳು ಹಿರಿಯರಿಗೂ, ಅತ್ಯಂತ ಉಪಯುಕ್ತ ಮಾಹಿತಿಗಳನ್ನು ಕೊಟ್ಟಿವೆ. ಶ್ರೀಯುತರ ಸಂಪಾದನೆಯ ಚಟುವಟಿಕೆಯಲ್ಲಿ, ಬೆಂಗಳೂರು ದರ್ಶನ ಸಂಪುಟಗಳು, ಅತ್ಯಂತ ಉಪಯುಕ್ತಮಾಹಿತಿಗಳನ್ನು ಬೆಂಗಳೂರಿನ ಜನರಿಗೆ ಕೊಟ್ಟಿವೆ.

ಶ್ರೀಯುತರು ಉಡುಪಿಯಲ್ಲಿ ೨೦೦೮ರಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದ್ದರು. ಬಿ.ಎಂ.ಶ್ರೀ ಪ್ರತಿಷ್ಠಾನದ ಅಧ್ಯಕ್ಷರಾಗಿಯೂ ಎರಡು ವರ್ಷಗಳ ಕಾಲ ಮಾರ್ಚ್ ೧೯೯೦ರಿಂದ ಮಾರ್ಚ್ ೧೯೯೨ ಸೇವೆಸಲ್ಲಿಸಿದ್ದಾರೆ. ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳೆರಡರಲ್ಲಿಯೂ ಕೃತಿಗಳನ್ನು ರಚನೆ ಮಾಡಿದ್ದಾರೆ.

"ಕಾದಂಬರಿ ಮತ್ತು ಸಾಮಾನ್ಯ ಮನುಷ್ಯ", "ಗ್ರೀಕ್ ರಂಗಭೂಮಿ", "ವಿಲಿಯಂ ಷೇಕ್ಸ್ ಪಿಯರ್", ಇಂಗ್ಲೀಷ್ ಸಾಹಿತ್ಯ ಚರಿತ್ರೆ", "A History of Kannada Literature, An Introduction to to Modern Kannada Literature, T.P. Kailasam, ಅವರ ಕೆಲವು ಪ್ರಸಿದ್ಧ ಕೃತಿಗಳು.

ಶ್ರೀಯುತರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ವಿ.ಎಂ.ಇನಾಂದಾರ್ ವಿಮರ್ಶಾ ಪ್ರಶಸ್ತಿ, ವರ್ಧಮಾನ ಪ್ರಶಸ್ತಿ ಮುಂತಾದ ಹಲವಾರು ಪ್ರಶಸ್ತಿಗಳು ಲಭಿಸಿವೆ. ಅವರು ಹತ್ತಾರು ಕಡೆ ಸನ್ಮಾನಗಳು ಪಾತ್ರರಾಗಿದ್ದಾರೆ.

ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲೇ "ಪ್ರೊ||ಎಲ್.ಎಸ್. ಶೇಷಗಿರಿರಾವ್ ವಿಮರ್ಶಾ ಪ್ರಶಸ್ತಿ"ಯನ್ನು ಶ್ರೀಯುತರು ೨೦೧೭ರಿಂದ ಪ್ರಾರಭಿಸಿದ್ದು, ಪ್ರತಿವರ್ಷ ಶ್ರೇಷ್ಠ ವಿಮರ್ಶಕರನ್ನು ಗುರುತಿಸಿ, ಜೀವಮಾನ ಸಾಧನೆಗೆ ಪ್ರಶಸ್ತಿ ನೀಡುತ್ತಿದೆ.

**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2018-2020**
**dt. 27-10-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Date of publishing and Posting : 30-12-2017**

## ೨೦೧೭ ಡಿಸೆಂಬರ್ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷರಣಾ ಕಾರ್ಯವು ನಡೆಯುತ್ತಿದೆ. ಡಿಸೆಂಬರ್ ೨೦೧೭ ನೇ ತಿಂಗಳಿನಲ್ಲಿ ೨ ಗ್ರಂಥಗಳ ಶುಷ್ಕ ಶುದ್ಧಿಕರಣ, ೪ ಗ್ರಂಥಗಳಿಗೆ ತೈಲ/ಮಸಿ, ೬ ಗ್ರಂಥಗಳಲ್ಲಿ ಪತ್ರಗಳ ಮರು ಜೋಡಣೆ ಕಾರ್ಯ,೪ಗ್ರಂಥಗಳಿಗೆ ಅಟ್ಟೆ ಮತ್ತು ಬಟ್ಟೆ ಸುತ್ತುವ ಕಾರ್ಯ, ೬ ಗ್ರಂಥಗಳಿಗೆ ಸೂಚಿ ತಯಾರಿಸಲಾಗಿದೆ. ಏಳು ಕಾಗದ ಹಸ್ತಪ್ರತಿಗಳ ಸಂರಕ್ಷ,ಣೆ ಪೂರ್ಣಗೊಂಡು, ಅವುಗಳ ಸ್ಕ್ಯಾನಿಂಗ್ ಕಾರ್ಯವೂ ಮುಗಿದಿದೆ.

## ಶ್ರೀ ಎನ್.ಎಸ್.ಶ್ರೀಧರ ಮೂರ್ತಿ



ಬಾಲ್ಯದಿಂದಲೂ ಪ್ರತಿಭಾವಂತರು ಎನ್ನಿಸಿಕೊಂಡ ಶ್ರೀ ಎನ್.ಎಸ್.ಶ್ರೀಧರ ಮೂರ್ತಿ ಬಿ.ಎ.ಪದವಿಯಲ್ಲಿ ಎಂಟನೇ ರ್‍ಯಾಂಕ್ ಮತ್ತು ಮಂಗಳೂರು ವಿಶ್ವವಿದ್ಯಾಲಯದಿಂದ ಅರ್ಥಶಾಸ್ತ್ರದಲ್ಲಿ ಚಿನ್ನದ ಪದಕ ಮತ್ತು ರ್‍ಯಾಂಕ್‌ನೊಂದಿಗೆ ಸ್ನಾತಕೋತ್ತರ ಪದವಿಯನ್ನು ಪಡೆದವರು. ಉಪನ್ಯಾಸಕರಾಗಿ ತಮ್ಮ ವೃತ್ತಿಜೀವನವನ್ನು ಆರಂಭಿಸಿದ ಅವರು ನಂತರ ಹಲವು ಕಾರ್ಪೋರೇಟ್ ಸಂಸ್ಥೆಗಳಲ್ಲಿ ಉನ್ನತ ಹುದ್ದೆಯನ್ನು ನಿರ್ವಹಿಸಿದವರು. ಮಲ್ಲಿಗೆ ಮಾಸ ಪತ್ರಿಕೆಯ ಮೂಲಕ ಪತ್ರಿಕೋದ್ಯಮಕ್ಕೆ ಬಂದ ಅವರು ಮಂಗಳವಾರ ಪತ್ರಿಕೆ ಸಂಪಾದಕರಾಗಿ, ವಿಜಯ ವಾಣಿ ದಿನ ಪತ್ರಿಕೆ ಪುರವಣಿ ಸಂಪಾದಕರಾಗಿ ಕೂಡ ಕಾರ್ಯ ನಿರ್ವಹಿಸಿದ್ದಾರೆ.ಈಗ ಮಾಧ್ಯಮ ಸಲಹೆಗಾರರಾಗಿ ಹಲವು ಪ್ರಮುಖ ಸಂಸ್ಥೆಗಳೊಂದಿಗೆ ಕಾರ್ಯ ನಿರ್ವಹಿಸುತ್ತಿದ್ದಾರೆ.ಕಳೆದ ಎರಡು ದಶಕದಿಂದ ಸಾಂಸ್ಕೃತಿಕ ಪತ್ರಿಕೋದ್ಯಮವನ್ನು ಉಳಿಸುವಲ್ಲಿ ವಿವಿಧ ಪತ್ರಿಕೆಗಳ ಮೂಲಕ ಶ್ರಮಿಸುತ್ತಿದ್ದಾರೆ. ಚಲನಚಿತ್ರ ಇತಿಹಾಸದ ಕುರಿತು ಆಳವಾದ ಅಧ್ಯಯನ ನಡೆಸಿರುವ ಇವರು ಸಾಹಿತ್ಯ ಮತ್ತು ಅಧ್ಯಾತ್ಮ ಕ್ಷೇತ್ರದಲ್ಲಿಯೂ ಕೆಲಸ ಮಾಡಿದ್ದಾರೆ.

"ಕನ್ನಡ ಚಿತ್ರಗೀತೆಗಳ ಚಾರಿತ್ರಿಕ ಅಧ್ಯಯನ" ಅವರ ಸಂಶೋಧನಾ ಕೃತಿ. ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಅವರ ಮೂರು ಸಾವಿರಕ್ಕೂ ಹೆಚ್ಚು ಲೇಖನಗಳು ಪ್ರಕಟವಾಗಿದ್ದು ಕಥೆ, ಕಾದಂಬರಿ, ವಿಮರ್ಶೆ, ಸಂಶೋಧನೆ ಹೀಗೆ ವಿವಿಧ ಪ್ರಕಾರಗಳಲ್ಲಿ ಮೂವತ್ತೇಳು ಕೃತಿಗಳು ಅಚ್ಚಾಗಿವೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ-ಅಂಚೆ

ಶ್ರೀಮತಿ/ಶ್ರೀ........................................................................................

........................................................................................................

........................................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭